# ಕರ್ನಾಟಕ ವಿಧಾನಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 111 |
| ಸದಸ್ಯರ ಹೆಸರು | ಶ್ರೀ ಎಂ ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 21-09-2020 |
| ಉತ್ತರಿಸಬೇಕಾದ ಸಚಿವರು | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು |

| ಪ್ರಶ್ನೆ | ಉತ್ತರ |
|---|---|
| **ಅ)** ರಾಜ್ಯದಲ್ಲಿ ರಾಷ್ಟ್ರೀಯ ಶಿಕ್ಷಣ ನೀತಿಯನ್ನು ಮೊದಲು ಜಾರಿ ಮಾಡಲು ಸರ್ಕಾರ ಕೈಗೊಂಡ ಕ್ರಮವೇನು; | • ಶಿಕ್ಷಣ ಮಂತ್ರಾಲಯ , ಭಾರತ ಸರ್ಕಾರ, ಇವರಿಂದ ನೀಡಿರುವ ರಾಷ್ಟ್ರೀಯ ಶಿಕ್ಷಣ ನೀತಿ 2020ರ ಕಾಲಸೂಚಿಯಂತೆ ಅನುಷ್ಠಾನ ಕ್ರಮಗಳನ್ನು ಕೈಗೊಳ್ಳಲು ರಾಜ್ಯ ಸರ್ಕಾರವು ಕಾರ್ಯ ಪ್ರವೃತ್ತವಾಗಿದೆ.<br>• ರಾಜ್ಯದಲ್ಲಿ ರಾಷ್ಟ್ರೀಯ ಶಿಕ್ಷಣ ನೀತಿ 2020ನ್ನು ಅಳವಡಿಸಿಕೊಳ್ಳಲು ತಕ್ಷಣದ ಪ್ರಯತ್ನಗಳನ್ನು ಕೈಗೊಳ್ಳಲಾಗಿದೆ. ನೀತಿ ಘೋಷಣೆಯಾದ 2ನೇ ದಿನದಂದೇ ಅನುಷ್ಠಾನ ಯೋಜನೆಯ ಕುರಿತು ಸಮಾಲೋಚನಾ ಸಭೆ ನಡೆಸಲಾಯಿತು. ಶಿಕ್ಷಣ ನೀತಿಯ ಅನುಷ್ಠಾನ ಚೌಕಟ್ಟಿನ ರೂಪುರೇಷೆಯನ್ನು ವಿನ್ಯಾಸಗೊಳಿಸಲು ಕೋರ್ ಸಮಿತಿಯನ್ನು ರಚಿಸಲಾಗಿದೆ.<br>• ಅದರಂತೆ, ಕೋರ್ ಸಮಿತಿಯು ರಾಷ್ಟ್ರೀಯ ಶಿಕ್ಷಣ ನೀತಿ 2020ರ ಸಮಗ್ರ ದೃಷ್ಟಿಕೋನವನ್ನು ಅರ್ಥ ಮಾಡಿಕೊಳ್ಳಲು ಮತ್ತು ರಾಜ್ಯದಲ್ಲಿ ಈ ನೀತಿಯ ಯಶಸ್ವಿ ಅನುಷ್ಠಾನಕ್ಕೆ ಪರಿಣಾಮಕಾರಿಯಾದ ವಿಧಾನಗಳನ್ನು ಅನ್ವೇಷಿಸಲು ಸಮಗ್ರವಾದ ಸಂವಾದಗಳನ್ನು ಕೈಗೊಂಡಿತು.<br>• ಈ ಸಂವಾದದ ಪರಿಣಾಮವಾಗಿ ಕೋರ್ ಸಮಿತಿಯ ನೇತೃತ್ವದಲ್ಲಿ ರಾಷ್ಟ್ರೀಯ ಶಿಕ್ಷಣ ನೀತಿ 2020ರಲ್ಲಿನ ವಿವಿಧ ಅಧ್ಯಾಯಗಳ ಆಧಾರದ ಮೇಲೆ ಉಪಸಮಿತಿಗಳನ್ನು ರಚಿಸಿ ವಿವರವಾದ ಚರ್ಚೆಗಳನ್ನು ನಡೆಸಿ ಕರ್ನಾಟಕದ ಪ್ರಸ್ತುತ ಶಾಲಾ ಶಿಕ್ಷಣದ ಶೈಕ್ಷಣಿಕ ಪರಿಸ್ಥಿತಿಯನ್ನು ಪರಿಶೀಲಿಸಿ ಮತ್ತು ಗಮನಹರಿಸಬೇಕಾದ ಪ್ರಮುಖ ಕ್ಷೇತ್ರಗಳನ್ನು ಗುರ್ತಿಸಿ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಸೂಕ್ತ ಸಮಯ ಸೂಚಿಯೊಂದಿಗೆ ಕೈಗೊಳ್ಳಬೇಕಾದ ಪ್ರಮುಖ ಕ್ರಮಗಳನ್ನು ಗುರುತಿಸಲಾಗಿದೆ. |

| | |
|---|---|
| | • ಮಾನ್ಯ ಶಿಕ್ಷಣ ಮಂತ್ರಿಗಳ ಆದೇಶದಂತೆ ಸೆಪ್ಟೆಂಬರ್ 1 ರಿಂದ 25ರವರೆಗೆ ಶಿಕ್ಷಣ ಕ್ಷೇತ್ರದ ಎಲ್ಲಾ ಭಾಗಿದಾರರೊಡನೆ ವೆಬಿನಾರ್ ಮೂಲಕ ಸಮಾಲೋಚನಾ ಸಭೆಗಳನ್ನು ಆಯೋಜಿಸಲಾಗಿದೆ. ಸದರಿ ಸಭೆಗಳಲ್ಲಿ ಸಂಗ್ರಹಿಸಿದ ಅಭಿಪ್ರಾಯಗಳನ್ನು ಕ್ರೋಢೀಕರಿಸಿ ಅನುಷ್ಠಾನ ಚೌಕಟ್ಟಿನ ರೂಪುರೇಷೆಗಳನ್ನು ವಿನ್ಯಾಸಗೊಳಿಸುವ ಸಂದರ್ಭದಲ್ಲಿ ಅಳವಡಿಸಿಕೊಳ್ಳಲಾಗುವುದು.<br>ರಾಷ್ಟ್ರೀಯ ಶಿಕ್ಷಣ ನೀತಿ 2020ರ ಸಂಬಂಧ ಶಿಕ್ಷಣ ಮಂತ್ರಾಲಯ, ಭಾರತ ಸರ್ಕಾರ, ಇವರು ನೀಡಿರುವ Task points ಗಳನ್ನು 2020 ರಿಂದ 2030 ರ ವರೆಗಿನ ಕಾಲಸೂಚಿಯಲ್ಲಿ ಅನುಷ್ಠಾನ ಮಾಡಲು ಕ್ರಮವಹಿಸಲಾಗುತ್ತಿದೆ. |
| **ಆ)** ರಾಷ್ಟ್ರೀಯ ಶಿಕ್ಷಣ ನೀತಿ ಈಗಾಗಲೇ ಶಾಲೆಯಲ್ಲಿ ಓದುತ್ತಿರುವ 1–5ನೇ ತರತಗತಿ ಮತ್ತು 8ನೇ ತರಗತಿಯ ಮಕ್ಕಳಿಗೆ ಅನ್ವಯವಾಗುತ್ತಿದೆಯೇ; | ಈಗಾಗಲೇ ಶಾಲೆಯಲ್ಲಿ ಓದುತ್ತಿರುವ 1–5ನೇ ತರಗತಿ ಮತ್ತು 8ನೇ ತರಗತಿಯ ಮಕ್ಕಳಿಗೆ ಶಿಕ್ಷಣ ಮಂತ್ರಾಲಯ, ನವದೆಹಲಿಯವರು ಸೂಚಿಸಿರುವ ಕಾಲಸೂಚಿಯನ್ನು ಆಧರಿಸಿ ರಾಷ್ಟ್ರೀಯ ಶಿಕ್ಷಣ ನೀತಿ 2020ನ್ನು ಅನ್ವಯಿಸಲಾಗುವುದು. |
| **ಇ)** ರಾಷ್ಟ್ರೀಯ ಶಿಕ್ಷಣ ನೀತಿಗೆ ಅನ್ವಯಿಸುವಂತೆ ಗುಣಮಟ್ಟದ ಶಿಕ್ಷಣವನ್ನು ನೀಡಲು ಶಿಕ್ಷಕರಿಗೆ ತರಬೇತಿ ನೀಡುವ ಸಲುವಾಗಿ ಸರ್ಕಾರ ಕೈಗೊಂಡ ಕ್ರಮಗಳೇನು? | ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು 2020ನ್ನು NCERT ರವರು 2021ನೇ ಸಾಲಿನಲ್ಲಿ ನೀಡಲಿದ್ದು ಇದರಂತೆ ಕರ್ನಾಟಕ ಪಠ್ಯಕ್ರಮ ಚೌಕಟ್ಟನ್ನು ಕೂಡಲೇ ಸಿದ್ಧಪಡಿಸಲಾಗುವುದು.<br>ಕೆ.ಸಿ.ಎಫ್ 2020ನ್ನು ಆಧರಿಸಿ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣದ ಪಠ್ಯಕ್ರಮಗಳನ್ನು ರಚಿಸಲಾಗುವುದು.<br>ಹೊಸ ಪಠ್ಯಕ್ರಮ ಹಾಗೂ ಪಠ್ಯಪುಸ್ತಕಗಳ ರಚನೆಯ ನಂತರ ಎಲ್ಲಾ ಪ್ರಾಥಮಿಕ ಮತ್ತು ಪ್ರೌಢ ಶಾಲಾ ಶಿಕ್ಷಕರಿಗೆ ತರಬೇತಿ ನೀಡಲಾಗುವುದು. |

**ಇಡಿ 114 ಪಿಜಿಸಿ 2020**

S. Su

**[ ಎಸ್.ಸುರೇಶ್ ಕುಮಾರ್]**
**ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ**
**ಸಕಾಲ ಸಚಿವರು.**